# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಬುಧವಾರ, ಡಿಸೆಂಬರ್ ೦೩, ೨೦೧೪ (ಮಾರ್ಗಶಿರ ೧೨, ಶಕ ವರ್ಷ ೧೯೩೬) | ನಂ. ೭೫೬ |
|---|---|---|
| **Part– I** | **Bangalore, Wednesday, December 03, 2014 (Margashira 12, Shaka Varsha 1936)** | **No. 756** |


### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರಡಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸುವ ಸಲುವಾಗಿ ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯಾನಿಕ್ಸ್) ಪ್ರಸ್ತಾಪಿಸಿದ ದರವನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:**

1. ದಿನಾಂಕ: 28.03.2014ರ ಸರ್ಕಾರಿ ಆದೇಶ ಸಂ: ಸಿಆಸುಇ 34 ಇಆಇ 2012.
2. ವ್ಯವಸ್ಥಾಪಕ ನಿರ್ದೇಶಕರು, ಕಿಯಾನಿಕ್ಸ್, ಇವರ ದಿನಾಂಕ: 07.11.2014ರ ಪತ್ರ ಸಂ: KSEDC/MD /e-Gov/Online Exam/2014-15.
3. ಸರ್ಕಾರದ ದಿನಾಂಕ: 11.11.2014ರ ಪತ್ರ ಸಂ: ಸಿಆಸುಇ 104 ಇಆಇ 2014.
4. ವ್ಯವಸ್ಥಾಪಕ ನಿರ್ದೇಶಕರು, ಕಿಯಾನಿಕ್ಸ್, ಇವರ ದಿನಾಂಕ: 13.11.2014ರ ಪತ್ರ ಸಂ: KSEDC/MD /e-Gov/Online Exam/2014-15.

**ಪ್ರಸ್ತಾವನೆ:**

1. ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರಡಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸುವ ಕಾರ್ಯವನ್ನು, ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯಾನಿಕ್ಸ್)ಗೆ ವಹಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 28.03.2014ರ ಆದೇಶದನ್ವಯ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಅದರಂತೆ, ಕಿಯಾನಿಕ್ಸ್ ಸಂಸ್ಥೆಯು ಅದರ ಟೆಂಡರ್ ಸಂಖ್ಯೆ: KSEDC/IT EDU/001/2014-15 ರನ್ವಯ "On-line Test and Assessment Operator" ರ ಆಯ್ಕೆಗಾಗಿ ಟೆಂಡರ್‌ಗಳನ್ನು ಆಹ್ವಾನಿಸಿತು. ಈ ರೀತಿ ಕೈಗೊಂಡ ಟೆಂಡರ್ ಪ್ರಕ್ರಿಯೆಯನ್ನು ಪೂರ್ಣಗೊಳಿಸಿದ ನಂತರ ವ್ಯವಸ್ಥಾಪಕ ನಿರ್ದೇಶಕರು, ಕಿಯಾನಿಕ್ಸ್ ರವರ, ಮೇಲೆ (2)ರಲ್ಲಿ ಓದಲಾದ ದಿನಾಂಕ: 07.11.2014ರ ಪತ್ರದನ್ವಯ ಪರೀಕ್ಷೆಗೆ ಒಳಗಾಗುವ ಪ್ರತಿ ಸರ್ಕಾರಿ ನೌಕರರಿಗಾಗಿ ಒಟ್ಟಾರೆ (ತಲಾ) ₹295ರ ಈ ಕೆಳಗೆ ನಮೂದಿಸಿದ ದರಕ್ಕೆ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ:–

| | | |
|---|---|---|
| 1. | ಯಶಸ್ವಿ ಬಿಡ್‌ದಾರ ಸಂಸ್ಥೆಯಾದ ಮೆ॥ ಸಿಫಿ ಟೆಕ್ನಾಲಜೀಸ್ ಲಿಮಿಟೆಡ್ (M/s Sify Technologies Limited) ಪ್ರಸ್ತಾಪಿಸಿದ, ಸಂಧಾನ ದರ (negotiated rate) | ₹270<br>(₹240ರ ದರ +12.36 ಸೇವಾ ಕರ, ಒಟ್ಟು ₹270) |
| 2. | ಪರೀಕ್ಷೆಗೆ ಒಳಗಾಗುವ ಪ್ರತಿ ಸರ್ಕಾರಿ ನೌಕರರಿಗಾಗಿ ಕಿಯಾನಿಕ್ಸ್ ರ ಸೇವಾ ಶುಲ್ಕ(service charge) | ₹25 |
| | ಒಟ್ಟು | ₹ 295<br>(ಇನ್ನೂರ ತೊಂಭತ್ತೈದು ₹ಗಳು ಮಾತ್ರ) |

2. ಮೇಲಿನ ಪಟ್ಟಿಯ ಕ್ರಮ ಸಂಖ್ಯೆ:2ರಲ್ಲಿನ ಸೇವಾ ಶುಲ್ಕಕ್ಕೆ(service charge) ಸಂಬಂಧಿಸಿದಂತೆ ಸಮರ್ಥನೀಯ ಕಾರಣಗಳು ಇದ್ದಲ್ಲಿ ಅದನ್ನು ತಿಳಿಸುವಂತೆ, ವ್ಯವಸ್ಥಾಪಕ ನಿರ್ದೇಶಕರು, ಕಿಯಾನಿಕ್ಸ್ ಇವರಿಗೆ ಉದ್ದೇಶಿಸಿದ, ಮೇಲೆ (3)ರಲ್ಲಿ ಓದಲಾದ ಸರ್ಕಾರದ ದಿನಾಂಕ: 11.11.2014ರ ಪತ್ರದನ್ವಯ ಕೋರಲಾಯಿತು. ಅದಕ್ಕೆ ಪ್ರತಿಕ್ರಿಯಿಸುತ್ತಾ, ಮೇಲೆ (4)ರಲ್ಲಿ ಓದಲಾದ ದಿನಾಂಕ: 13.11.2014ರ ಅವರ ಪತ್ರದನ್ವಯ ವ್ಯವಸ್ಥಾಪಕ ನಿರ್ದೇಶಕರವರು ಈ ಕೆಳಗೆ ಉದ್ಧರಿಸಿದಂತೆ ಸಮರ್ಥನೆ ನೀಡಿರುತ್ತಾರೆ:–

"KEONICS has submitted the proposal for online examination project along with detailed tendering process and the prices received from the successful bidder. KEONICS has following role and responsibility in this project and therefore KEONICS proposes rto establish a Monitoring Cell which shall be as follows:

1. Exclusive team consisting of 4 to 5 members headed by an officer has to be formed to supervise, monitor and control the entire system and procedure for conducting online examination.

2. The team has to periodically visit the examination centers and ensure that appropriate infrastructure is set up at each location.
3. A monitoring center at our following address will be set up to have an online interaction with all the district head quarters.
KEONICS Training Center
#29/1, Race Course Road, Bangalore-560 001.
4. Periodical review of the question banks and updating the questions in consultation with Center for e-Governance.
5. To co-ordinate with the Center for e-Governance and the implementing agency for online examination for all related activities.

In view of the facts explained above, KEONICS would charge a nominal ₹25 per candidate service charge over and above the price received by the successful bidder."

3. ಈ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 104 ಇಆಇ 2014, ಬೆಂಗಳೂರು ದಿನಾಂಕ: 2ನೇ ಡಿಸೆಂಬರ್ 2014**

4. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ, ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರಡಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸುವ ಸಲುವಾಗಿ ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯಾನಿಕ್ಸ್) ಪ್ರಸ್ತಾಪಿಸಿದ, ಪರೀಕ್ಷೆಗೆ ಒಳಗಾಗುವ ಪ್ರತಿ ಸರ್ಕಾರಿ ನೌಕರರಿಗಾಗಿ ಒಟ್ಟಾರೆ (ತಲಾ) ₹295ರ ಈ ಕೆಳಗೆ ನಮೂದಿಸಿದ ದರಕ್ಕೆ ಸರ್ಕಾರದ ಅನುಮೋದನೆಯನ್ನು ಈ ಮೂಲಕ ನೀಡಲಾಗಿದೆ:–

| | | |
|---|---|---|
| 1. | ಯಶಸ್ವಿ ಬಿಡ್‌ದಾರ ಸಂಸ್ಥೆಯಾದ ಮೆ॥ ಸಿಫಿ ಟೆಕ್ನಾಲಜೀಸ್ ಲಿಮಿಟೆಡ್ (M/s Sify Technologies Limited) ಪ್ರಸ್ತಾಪಿಸಿದ, ಸಂಧಾನ ದರ (negotiated rate) | ₹ 270<br>(₹240ರ ದರ + 12.36 ಸೇವಾ ಕರ, ಒಟ್ಟು ₹270) |
| 2. | ಪರೀಕ್ಷೆಗೆ ಒಳಗಾಗುವ ಪ್ರತಿ ಸರ್ಕಾರಿ ನೌಕರರಿಗಾಗಿ ಕಿಯಾನಿಕ್ಸ್ ರ ಸೇವಾ ಶುಲ್ಕ(service charge) | ₹ 25 |
| | ಒಟ್ಟು | ₹ 295<br>(ಇನ್ನೂರ ತೊಂಭತ್ತೈದು ₹ಗಳು ಮಾತ್ರ) |

5. ಮೇಲೆ (1)ರಲ್ಲಿ ಓದಲಾದ ದಿನಾಂಕ: 28.03.2014ರ ಆದೇಶದನ್ವಯ ಸರ್ಕಾರಿ ನೌಕರರಿಗಾಗಿ ಸದರಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯಾನಿಕ್ಸ್)ರ ವತಿಯಿಂದ ತ್ವರಿತವಾಗಿ ನಡೆಸತಕ್ಕದ್ದು.

6. ಈ ಉದ್ದೇಶಕ್ಕಾಗಿ ಅನುದಾನ ಬಿಡುಗಡೆಗಾಗಿ ಪ್ರಸ್ತಾವನೆಗಳನ್ನು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯಾನಿಕ್ಸ್)ರ ವತಿಯಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ಗೆ ಸೂಕ್ತ ಸಮಯದಲ್ಲಿ ಕಳುಹಿಸತಕ್ಕದ್ದು.

7. ಸದರಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸಲು ಆಗುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "3451–00–090–2–0–059 ವಿದ್ಯುನ್ಮಾನ ಆಡಳಿತ ಯೋಜನೆ–ಇತರೆ ವೆಚ್ಚಗಳು (ಯೋಜನೆ)"ಯಡಿ ಭರಿಸತಕ್ಕದ್ದು.

8. ಆರ್ಥಿಕ ಇಲಾಖೆಯ ದಿನಾಂಕ: 01.12.2014ರ ಟಿಪ್ಪಣಿ ಸಂಖ್ಯೆ: ಆಇ 995 ವೆಚ್ಚ–12 2014ರನ್ವಯ ಆರ್ಥಿಕ ಇಲಾಖೆ ನೀಡಿದ ಸಹಮತಿಯಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವೀಣಾ**
ಪೀಠಾಧಿಕಾರಿ–1
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಇ–ಆಡಳಿತ)

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| **ಭಾಗ– I** | **ಬೆಂಗಳೂರು, ಸೋಮವಾರ, ಡಿಸೆಂಬರ್ ೦೮, ೨೦೧೪ (ಮಾರ್ಗಶಿರ ೧೭, ಶಕ ವರ್ಷ ೧೯೩೬)** | **ನಂ. ೭೬೪** |
| **Part– I** | **Bangalore, Monday, December 08, 2014 (Margashira 17, Shaka Varsha 1936)** | **No. 764** |


## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.
## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ರಾಜ್ಯಾದ್ಯಂತ ಹೊಸದಾಗಿ ಚಿಲ್ಲರೆ ಪೆಟ್ರೋಲ್ ಬಂಕ್‌ಗಳನ್ನು ಸ್ಥಾಪಿಸುವ ಹಂತದಲ್ಲಿ ನಿರಾಕ್ಷೇಪಣಾ ಪತ್ರವನ್ನು ನೀಡುವಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಲು Single window clearnce System ಅಡಿಯಲ್ಲಿ ಕಾರ್ಯ ನಿರ್ವಹಿಸುವ ಬಗ್ಗೆ.

**ಓದಲಾಗಿದೆ:** ಕೇಂದ್ರ ಸರ್ಕಾರದ ಜಂಟಿ ಕಾರ್ಯದರ್ಶಿಗಳು, ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲ ಸಚಿವಾಲಯದ ಪತ್ರ ಸಂ. P-19011/9/2014–IOC, ದಿನಾಂಕ: ಅಕ್ಟೋಬರ್, 2014.

**ಪ್ರಸ್ತಾವನೆ:**

ಮೇಲೆ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ರಾಜ್ಯಾದ್ಯಂತ ಹೊಸದಾಗಿ ಚಿಲ್ಲರೆ ಪೆಟ್ರೋಲ್ ಬಂಕ್‌ಗಳನ್ನು ಸ್ಥಾಪಿಸುವ ಹಂತದಲ್ಲಿ ನಿರಾಕ್ಷೇಪಣಾ ಪತ್ರವನ್ನು ನೀಡುವಲ್ಲಿ ಆಗುತ್ತಿರುವ ವಿಳಂಬದ ಬಗ್ಗೆ ಪ್ರಸ್ತಾಪಿಸಿದ್ದು, ಈ ಸಂಬಂಧದಲ್ಲಿ ಒಂದು ಪೆಟ್ರೋಲ್ ಬಂಕ್‌ನ್ನು ಸ್ಥಾಪಿಸುವ ಹಂತದಲ್ಲಿ ಹಲವಾರು ಇಲಾಖೆಗಳ ನಿರಾಕ್ಷೇಪಣೆಯ ಪತ್ರವು (NOC) ಅಗತ್ಯವಿದ್ದು, ನಿಗಧಿತ ಅವಧಿಯಲ್ಲಿ ಸಂಬಂಧಿಸಿದ ಇಲಾಖೆಗಳಿಂದ ನಿರಾಕ್ಷೇಪಣೆಯ ಪತ್ರವು (NOC) ದೊರೆಯುವುದು ವಿಳಂಬವಾಗುತ್ತಿರುವುದು ಅವರ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ ಹಾಗೂ ಈ ವಿಳಂಬವನ್ನು ತಪ್ಪಿಸಲು Single Window Clearnance System ಅಳವಡಿಸಿಕೊಂಡು ಹೊಸದಾಗಿ ಚಿಲ್ಲರೆ ಪೆಟ್ರೋಲ್ ಬಂಕ್‌ಗಳನ್ನು ಸ್ಥಾಪಿಸುವ ನಿಟ್ಟಿನಲ್ಲಿ ಜಿಲ್ಲಾಧಿಕಾರಿಗಳು ಒಂದು ತಿಂಗಳ ಅವಧಿಯೊಳಗೆ NOC ಯನ್ನು ನೀಡಲು ಕ್ರಮ ವಹಿಸಬಹುದಾಗಿರುತ್ತದೆಂದು ಅವರ ಪತ್ರದಲ್ಲಿ ಸಲಹೆ ಮಾಡಿರುತ್ತಾರೆ.

ಕೇಂದ್ರ ಸರ್ಕಾರದ ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲ ಸಚಿವಾಲಯದ ಜಂಟಿ ಕಾರ್ಯದರ್ಶಿಯವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 90 ಎಫ್‌ಪಿಪಿ 2014, ಬೆಂಗಳೂರು, ದಿನಾಂಕ: 06ನೇ ಡಿಸೆಂಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯಾದ್ಯಂತ ಹೊಸದಾಗಿ ಚಿಲ್ಲರೆ ಪೆಟ್ರೋಲ್ ಬಂಕ್‌ಗಳನ್ನು ಸ್ಥಾಪಿಸಲು ನಿರಾಕ್ಷೇಪಣಾ ಪತ್ರವನ್ನು ನೀಡುವಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಲು ಜಿಲ್ಲಾಧಿಕಾರಿಗಳು ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ರಾಜ್ಯ ಮಟ್ಟದ Single Window Clearnance System ಸಮಿತಿಯನ್ನು ರಚಿಸಿದೆ.

| ಕ್ರ.ಸಂ. | ಅಧಿಕಾರಿಯವರ ಹೆಸರು | ಹುದ್ದೆ |
|---|---|---|
| 1. | ಸಂಬಂಧಿಸಿದ ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಜಿಲ್ಲಾ ಅರಣ್ಯ ಅಧಿಕಾರಿ, ಅರಣ್ಯ ಇಲಾಖೆ. | ಸದಸ್ಯರು |
| 3. | ನಗರ ಸಭೆ ಆಯುಕ್ತರು/ಮುಖ್ಯಾಧಿಕಾರಿ, ಪಟ್ಟಣ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ | ಸದಸ್ಯರು |
| 4. | ಸ್ಥಳೀಯ ವ್ಯಾಟ್ ಅಧಿಕಾರಿ, ವಾಣಿಜ್ಯ ತೆರಿಗೆ ಇಲಾಖೆ | ಸದಸ್ಯರು |
| 5. | ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ | ಸದಸ್ಯರು |
| 6. | ಜಂಟಿ ನಿರ್ದೇಶಕರು/ಉಪ ನಿರ್ದೇಶಕರು, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | ಸದಸ್ಯರು |

ಮೇಲಿನ ಸದಸ್ಯರನ್ನೊಳಗೊಂಡ ಈ ಸಮಿತಿಯಲ್ಲಿ 6 ಜನ ಅಧಿಕಾರಿ ಸದಸ್ಯರು ಇದ್ದು, ಸಂಬಂಧಪಟ್ಟ ಜಿಲ್ಲೆ/ತಾಲ್ಲೂಕುಗಳಲ್ಲಿ ಪೆಟ್ರೋಲ್ ಬಂಕ್ ಸ್ಥಾಪನೆಗಾಗಿ ಪ್ರಸ್ತಾವನೆ ಸಲ್ಲಿಸಿದ ತಕ್ಷಣವೇ ಸಂಬಂಧಪಟ್ಟ ಇಲಾಖೆಗಳು ನಿರಂತರ ಸಂಪರ್ಕವಿಟ್ಟುಕೊಂಡು, ಕ್ರಮವಹಿಸಿ, ಅಂತಿಮವಾಗಿ ಜಿಲ್ಲಾಧಿಕಾರಿಯವರಿಂದ ನಿರಾಕ್ಷೇಪಣಾ ಪತ್ರವನ್ನು ಒಂದು ತಿಂಗಳ ಅವಧಿಯೊಳಗೆ ಸಮಿತಿಯು ನೀಡುವಂತೆ ಆದೇಶಿಸಲಾಗಿದೆ.

ಕೇಂದ್ರ ಸರ್ಕಾರದ ಜಂಟಿ ಕಾರ್ಯದರ್ಶಿಗಳು, ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲ ಸಚಿವಾಲಯದ ಪತ್ರ ಸಂ.P-19011/9/2014-IOC, ದಿನಾಂಕ: ಅಕ್ಟೋಬರ್, 2014ರ ಪತ್ರದ ಪ್ರತಿಯನ್ನು ಇದರೊಂದಿಗೆ ಮಾಹಿತಿಗಾಗಿ ಲಗತ್ತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎನ್. ಸುಮತಿ**

ಪೀಠಾಧಿಕಾರಿ

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

# ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಸೋಮವಾರ, ಡಿಸೆಂಬರ್ ೦೮, ೨೦೧೪ (ಮಾರ್ಗಶಿರ ೧೭, ಶಕ ವರ್ಷ ೧೯೩೬) | ನಂ. ೭೬೭ |
|---|---|---|
| Part– I | Bangalore, Monday, December 08, 2014 (Margashira 17, Shaka Varsha 1936) | No. 767 |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ
## ಅಧಿಕೃತ ಜ್ಞಾಪನ

**ಸಂಖ್ಯೆ: ಸಿಆಸುಇ 417 ಸೆನೆನಿ 2014, ಬೆಂಗಳೂರು, ದಿನಾಂಕ: 6.12.2014**

**ವಿಷಯ :** ಭಾರತ ಸಂವಿಧಾನದ ಅನುಚ್ಛೇದ 371(ಜೆ)ಯನ್ನು ಅನುಷ್ಠಾನಗೊಳಿಸಿ ಸ್ಥಳೀಯ ವೃಂದವನ್ನು ರಚಿಸಿದ ನಂತರ ಉಳಿದ ಮೂಲ ವೃಂದಕ್ಕೆ ಸಂಬಂಧಿಸಿದಂತೆ ರೋಸ್ಟರ್ ಬಿಂದುಗಳನ್ನು ಸರಿದೂಗಿಸಿ, ರೋಸ್ಟರನ್ನು ಚಾಲನೆಗೊಳಿಸುವ ಕುರಿತು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ದಿನಾಂಕ 6.11.2013ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 6 ಪಿಎಲ್‌ಎಕ್ಸ್ 2012ರಲ್ಲಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ನ್ನು ಜಾರಿಗೊಳಿಸಲಾಗಿದೆ.

2. ದಿನಾಂಕ 29.1.2014ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 43 ಹೆಚ್‌ಕೆಸಿ 2013ರಲ್ಲಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು, 2013ನ್ನು ಜಾರಿಗೊಳಿಸಲಾಗಿರುತ್ತದೆ. ಈ ನಿಯಮಗಳ ನಿಯಮ 3ರಲ್ಲಿ ಉಳಿದ ಮೂಲ ವೃಂದ (Residual Parent Cadre) ಮತ್ತು ಸ್ಥಳೀಯ ವೃಂದವನ್ನು (Local Cadre) ರಚಿಸುವ ಬಗ್ಗೆ ವಿವರಿಸಲಾಗಿರುತ್ತದೆ.

3. ದಿನಾಂಕ 10.4.2014ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 33 ಹೈಕಉ 2014ರಲ್ಲಿ ಸ್ಥಳೀಯ ವೃಂದವನ್ನು ರಚಿಸಿ, ಸ್ಥಳೀಯ ವ್ಯಕ್ತಿಗಳನ್ನು ಸ್ಥಳೀಯ ವೃಂದಕ್ಕೆ ಹಂಚಿಕೆ ಮಾಡಿ, ಆ ವೃಂದಕ್ಕೆ ವರ್ಗಾವಣೆ ಮಾಡಿದ ನಂತರ ಕೈಬಿಟ್ಟು ಹೋದ ರೋಸ್ಟರ್ ಬಿಂದುಗಳನ್ನು ಸರಿದೂಗಿಸಿ ರೋಸ್ಟರನ್ನು ಚಾಲನೆಗೊಳಿಸುವ ಬಗ್ಗೆ ವಿವರವಾದ ಸೂಚನೆಗಳನ್ನು ನೀಡಲಾಗಿರುತ್ತದೆ.

4. ದಿನಾಂಕ 10.4.2014ರ ಅಧಿಕೃತ ಜ್ಞಾಪನದಲ್ಲಿ ಸ್ಥಳೀಯ ವೃಂದವನ್ನು ಭರ್ತಿ ಮಾಡುವ ಬಗ್ಗೆ ಹಾಗೂ ಸ್ಥಳೀಯ ವೃಂದದಲ್ಲಿ ಕೈಬಿಟ್ಟು ಹೋದ ರೋಸ್ಟರ್ ಬಿಂದುಗಳನ್ನು ಸರಿದೂಗಿಸುವ ಬಗ್ಗೆ ಮಾತ್ರ ಸೂಚನೆಗಳನ್ನು ನೀಡಲಾಗಿದ್ದು, ಉಳಿಕೆ ಮೂಲ ವೃಂದದ ಹುದ್ದೆಗಳಲ್ಲಿನ ರೋಸ್ಟರ್ ಬಿಂದುಗಳನ್ನು ಸರಿದೂಗಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗ ಹಾಗೂ ಹಲವಾರು ನೇಮಕಾತಿ ಪ್ರಾಧಿಕಾರಗಳು ಸ್ಪಷ್ಟೀಕರಣ ಕೋರಲಾಗುತ್ತಿರುವ ಹಿನ್ನೆಲೆಯಲ್ಲಿ, ಉಳಿಕೆ ಮೂಲ ವೃಂದಗಳಿಗೆ ಸಂಬಂಧಿಸಿದಂತೆ ರೋಸ್ಟರ್ ಬಿಂದುಗಳ ಅಸಮತೋಲನವನ್ನು ಸರಿದೂಗಿಸುವ ಬಗ್ಗೆ ಸೂಚನೆಗಳನ್ನು ಹೊರಡಿಸುವುದು ಅವಶ್ಯವೆಂದು ಪರಿಗಣಿಸಿ ಈ ಕೆಳಕಂಡಂತೆ ಸೂಚನೆಗಳನ್ನು ನೀಡಲಾಗಿದೆ.

5. ಉಳಿಕೆ ಮೂಲ ವೃಂದದಿಂದ ಸ್ಥಳೀಯ ವೃಂದಕ್ಕೆ ಅಭ್ಯರ್ಥಿಗಳನ್ನು ಹಂಚಿಕೆ ಮಾಡಿದಾಗ ಅಭ್ಯರ್ಥಿಗಳು ರೋಸ್ಟರ್ ಬಿಂದುಗಳೊಂದಿಗೆ ಸ್ಥಳೀಯ ವೃಂದಕ್ಕೆ ವರ್ಗಾಯಿಸಲ್ಪಡುವುದರಿಂದ ಉಳಿಕೆ ಮೂಲ ವೃಂದದಲ್ಲಿ ಕೆಲವು ರೋಸ್ಟರ್ ಬಿಂದುಗಳು ಕೈಬಿಟ್ಟು ಹೋಗುವುದರಿಂದ ಉಳಿಕೆ ಮೂಲ ವೃಂದದಲ್ಲಿ ಅಸಮತೋಲನ ಉಂಟಾಗುತ್ತದೆ. ಆದ್ದರಿಂದ, ಉಳಿಕೆ ಮೂಲ ವೃಂದದ ರೋಸ್ಟರನ್ನು ಸರಿದೂಗಿಸಲು ಈ ರೀತಿ ಕೈಬಿಟ್ಟು ಹೋದ ರೋಸ್ಟರ್ ಬಿಂದುಗಳನ್ನು ತಕ್ಷಣದ ನೇಮಕಾತಿಯಲ್ಲಿ ಭರ್ತಿ ಮಾಡಬೇಕಾಗುತ್ತದೆ. ಆದುದರಿಂದ, ಈ ರೀತಿ ಉಳಿಕೆ ಮೂಲ ವೃಂದದ ರೋಸ್ಟರ್ ಬಿಂದುಗಳನ್ನು ಸರಿದೂಗಿಸಿದ ನಂತರ ಉಳಿಕೆ ಮೂಲ ವೃಂದದಲ್ಲಿ ಈ ಹಿಂದೆ ಯಾವ ರೋಸ್ಟರ್ ಬಿಂದುವಿನವರೆಗೆ ನೇಮಕಾತಿ ಪ್ರಕ್ರಿಯೆ ಪೂರ್ಣಗೊಂಡಿರುತ್ತದೆಯೋ ಅದರ ನಂತರದ ರೋಸ್ಟರ್ ಬಿಂದುವಿನಿಂದ ಚಾಲನೆಗೊಳಿಸತಕ್ಕದ್ದು.

6. ಈ ರೀತಿ ಕೈ ಬಿಟ್ಟು ಹೋದ ರೋಸ್ಟರ್ ಬಿಂದುಗಳನ್ನು ಸರಿದೂಗಿಸುವ ಸಂದರ್ಭದಲ್ಲಿ, ಕೈ ಬಿಟ್ಟು ಹೋದ ರೋಸ್ಟರ್ ಬಿಂದುಗಳಲ್ಲಿದ್ದ ನೌಕರರು ದಿನಾಂಕ 20.6.1995ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95 ಜಾರಿಗೆ ಬರುವ ಪೂರ್ವದಲ್ಲಿ ಇದ್ದ ಮೀಸಲಾತಿ ವರ್ಗೀಕರಣದನ್ವಯ ನೇಮಕಾತಿ ಹೊಂದಿದ್ದು, ಅದೇ ಹುದ್ದೆಯಲ್ಲಿ ಇಂದಿಗೂ ಕಾರ್ಯ ನಿರ್ವಹಿಸುತ್ತಿದ್ದಲ್ಲಿ, ಅಂತಹ ನೌಕರರ ಮೀಸಲಾತಿ ವರ್ಗೀಕರಣವನ್ನು ಪ್ರಸ್ತುತ ಜಾರಿಯಲ್ಲಿರುವ ಮೀಸಲಾತಿ ವರ್ಗೀಕರಣದೊಂದಿಗೆ ಹೊಂದಾಣಿಕೆ ಮಾಡಿ ಸರಿದೂಗಿಸತಕ್ಕದ್ದು.

7. ಮೇಲ್ಕಂಡ ಸೂಚನೆಗಳನ್ನು ಕರ್ನಾಟಕ ಲೋಕಸೇವಾ ಆಯೋಗ ಹಾಗೂ ಎಲ್ಲಾ ನೇಮಕಾತಿ ಪ್ರಾಧಿಕಾರಗಳು ಅನುಸರಿಸತಕ್ಕದ್ದು.

**ಫೈರೋಜಾ ಖಾನಂ**
ಸರ್ಕಾರದ ಅಪರ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು).

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೦೫, ೨೦೧೪ (ಮಾರ್ಗಶಿರ ೧೪, ಶಕ ವರ್ಷ ೧೯೩೬) | ನಂ. ೭೫೮ |
|---|---|---|
| **Part– III** | **Bangalore, Friday, December 05, 2014 (Margashira 14, Shaka Varsha 1936)** | **No. 758** |


**URBAN DEVELOPMENT SECRETARIAT**

**NOTIFICATION**

**No: UDD 51 MLR 2014, Bangalore, Dated: 04.12.2014**

Whereas the term of office of the elected councillor of the Saragur Town Panchayat is going to expire on 06.12.2014 and the election to this Town Panchayat is to be conducted in due course.

And whereas, having regard to the above circumstances, election to the office of councillor cannot be held and completed before the expiry of the term of office of the Town Panchayat, Saragur and as such it has become necessary to appoint Administrator to this Town Panchayat for the continued exercise of powers and performance or discharge of duties of functions conferred or imposed on it under the said Act.

Now, therefore, in exercise of the powers conferred by Section 315 of the Karnataka Municipalities Act 1964 (Karnataka Act 22 of 1964) the Government of Karnataka hereby appoints the Tahasildar, H.D.Kote Taluk as Administrator in respect of the Town Panchayat, Saragur with effect from 07.12.2014 till the council of this Town Panchayat is duly constitutued.

By order and in the name of the Governor of Karnataka

**Siddiq Pasha**
Under Secretary to Government
Urban Development Department

## ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಡಿಸೆಂಬರ್ ೦೬, ೨೦೧೪ (ಮಾರ್ಗಶಿರ ೧೫, ಶಕ ವರ್ಷ ೧೯೩೬) | ನಂ. ೭೬೧ |
|---|---|---|
| **Part– III** | **Bangalore, Saturday, November 06, 2014 (Margashira 15, Shaka Varsha 1936)** | **No. 761** |


**ನಗರಾಭಿವೃದ್ಧಿ ಸಚಿವಾಲಯ**

**ಕರಡು ಅಧಿಸೂಚನೆ**

**ಸಂ. ನಅಇ 522 ಮೈಅಪ್ರಾ 2014, ಬೆಂಗಳೂರು, ದಿನಾಂಕ: 06.12.2014**

ಕುಂದಾಪುರ ನಗರ ಯೋಜನಾ ಪ್ರಾಧಿಕಾರದ ಮಹಾಯೋಜನೆಯ ವ್ಯಾಪ್ತಿಗೆ ಅನ್ವಯಿಸದಂತೆ ದಿನಾಂಕ: 14–09–2012 ರಂದು ಹೊರಡಿಸಲಾಗಿದ್ದ ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 162 ಬೆಂರೂಪ್ರಾ 2011 ನ್ನು ಹಿಂಪಡೆದು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(ಇ) ರಡಿಯಲ್ಲಿ ಸರ್ಕಾರವು ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕುಂದಾಪುರ ನಗರ ಯೋಜನಾ ಪ್ರಾಧಿಕಾರದ ಮಹಾಯೋಜನೆಯ ವ್ಯಾಪ್ತಿಗೆ ಒಳಪಡುವ ಪ್ರದೇಶಗಳಲ್ಲಿ ಅನುಮೋದನೆಗೊಂಡಿರುವ ಮಹಾಯೋಜನೆಯ ವಲಯ ನಿಯಮಾವಳಿಗಳ ಉಪ ವಿಭಜನೆ ನಿಯಮಗಳಿಗೆ ಸಂಬಂಧಿಸಿದಂತೆ ಕೆಳಕಂಡಂತೆ ತಿದ್ದುಪಡಿ ತರಲು ಉದ್ದೇಶಿಸಲಾಗಿದೆ.

ಸದರಿ ತಿದ್ದುಪಡಿ ಸಂಬಂಧ ಸಾರ್ವಜನಿಕರು ತಮ್ಮ ಸಲಹೆ/ಸೂಚನೆಗಳನ್ನು ಈ ಅಧಿಸೂಚನೆ ಪ್ರಕಟವಾದ 30 ದಿನಗಳೊಳಗಾಗಿ ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ, ವಿಕಾಸಸೌಧ, ಬೆಂಗಳೂರು–1 ಇವರಿಗೆ ಲಿಖಿತವಾಗಿ ಕಳುಹಿಸಿಕೊಡಬಹುದಾಗಿದೆ. 30 ದಿನಗಳ ನಂತರ ಸ್ವೀಕರಿಸಿರುವ ಸಾರ್ವಜನಿಕರ ಸಲಹೆ/ಸೂಚನೆಗಳನ್ನು ಪರಿಗಣಿಸಲಾಗುವುದಿಲ್ಲ.

**ಭೂ ವಿಭಜನೆ ಮಾಡುವಾಗ ಬಯಲು ಜಾಗ ಮತ್ತು ನಾಗರಿಕ ಸೌಲಭ್ಯಗಳ ವಿನಾಯಿತಿ ಕುರಿತು**

ಕುಂದಾಪುರ ನಗರ ಯೋಜನಾ ಪ್ರಾಧಿಕಾರದ ಮಹಾಯೋಜನೆಯ ವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(ಇ)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಪ್ರಾಧಿಕಾರದ ಮಹಾಯೋಜನೆ ವ್ಯಾಪ್ತಿಗೆ ಒಳಪಡುವ

ಭೂ ಅನ್ಯಕ್ರಾಂತವಾದ ಆದೇಶದಲ್ಲಿ ಜಮೀನಿನ ವಿಸ್ತೀರ್ಣವು **1,000 ಚದರ ಮೀಟರ್ (0.10 ಹೆಕ್ಟೇರ್) ಅಥವಾ ಅದಕ್ಕಿಂತ ಕಡಿಮೆ ಇದ್ದಲ್ಲಿ ಮಾತ್ರ** ಪ್ರಾಧಿಕಾರಗಳು ಖಾಸಗಿ ವಸತಿ ವಿನ್ಯಾಸಗಳನ್ನು ಅನುಮೋದಿಸುವಾಗ ಮಹಾಯೋಜನೆಯ ಅನುಮೋದಿತ ವಲಯ ನಿಯಮಾವಳಿಗಳಲ್ಲಿನ ಉಪ ವಿಭಜನೆ ನಿಯಮಗಳಲ್ಲಿರುವಂತೆ ವಿನ್ಯಾಸದಲ್ಲಿ ಉದ್ಯಾನವನ:ಬಯಲುಜಾಗ ಹಾಗೂ ನಾಗರೀಕ ಸೌಲಭ್ಯಗಳಿಗಾಗಿ ಕಾಯ್ದಿರಿಸುವ ಅಗತ್ಯವಿರುವುದಿಲ್ಲ. ಅದಕ್ಕೆ ಬದಲಾಗಿ ವಸತಿಗಾಗಿ ಗರಿಷ್ಠ ಶೇ. 55 ರಷ್ಟು ಹಾಗೂ ರಸ್ತೆಗಾಗಿ ಉಪಯೋಗಿಸಲ್ಪಡುವ ಕ್ಷೇತ್ರ, ನಂತರ ಉಳಿಯುವ ವಿಸ್ತೀರ್ಣದ ಸಂಪೂರ್ಣ ಶೇಕಡವಾರು ಜಮೀನಿಗೆ ಉಪ ನೋಂದಣಾಧಿಕಾರಿ ಕಛೇರಿಯಲ್ಲಿ ನಿಗಧಿಪಡಿಸಿದ ಭೂ ಪರಿವರ್ತಿತ ಜಮೀನಿನ ಮಾರ್ಗಸೂಚಿ ಬೆಲೆಯ (Guidance value) ಎರಡುಪಟ್ಟು ಹಣವನ್ನು ಜಮೀನಿನ ಮಾಲೀಕರು/ಅಭಿವೃದ್ಧಿದಾರರಿಂದ ವಿನಾಯಿತಿ ಶುಲ್ಕವಾಗಿ ಭರಿಸಿಕೊಳ್ಳತಕ್ಕದ್ದು. ಅದಾಗ್ಯೂ, ಗರಿಷ್ಠ ವಸತಿ ಹಾಗೂ ರಸ್ತೆ ಉಪಯೋಗದ ನಂತರ ಉಳಿಯುವ ವಿಸ್ತೀರ್ಣದ ಶೇಕಡವಾರು ಶೇ. 15 ಕ್ಕಿಂತ ಕಡಿಮೆ ಬಂದ ಸಂದರ್ಭದಲ್ಲಿ, ಕನಿಷ್ಠ ಶೇ. 15 ರಷ್ಟು ವಿಸ್ತೀರ್ಣವನ್ನು ವಿನಾಯಿತಿಗೆ ಒಳಪಡುವ ಪ್ರದೇಶವೆಂದು ಪರಿಗಣಿಸಿ, ವಿನಾಯಿತಿ ಶುಲ್ಕವನ್ನು ಲೆಕ್ಕ ಹಾಕಿ ಅದರನ್ವಯ ಉಪನೋಂದಣಾಧಿಕಾರಿಗಳ ಮಾರ್ಗಸೂಚಿ ಬೆಲೆಯ ಎರಡುಪಟ್ಟು ಹಣವನ್ನು ಜಮೀನಿನ ಮಾಲೀಕರು/ಅಭಿವೃದ್ಧಿದಾರರಿಂದ ಪಾವತಿಸಿಕೊಳ್ಳತಕ್ಕದ್ದು.

ಸದರಿ ವಿನ್ಯಾಸದಲ್ಲಿ ಅಳವಡಿಸಿದ ರಸ್ತೆ ಜಾಲದ ಪ್ರದೇಶವು ಶೇ. 45 ಅಥವಾ ಅದಕ್ಕಿಂತ ಹೆಚ್ಚಿನ ವಿಸ್ತೀರ್ಣದ ಜಾಗವು ಒಳಗೊಂಡಂತಹ ಸಂದರ್ಭದಲ್ಲಿ ಉದ್ಯಾನವನ/ಬಯಲುಜಾಗ ಮತ್ತು ನಾಗರಿಕ ಸೌಲಭ್ಯ ಜಾಗದ ವಿನಾಯಿತಿ ಶುಲ್ಕವನ್ನು ಪಾವತಿಸಿಕೊಳ್ಳುವ ಅಗತ್ಯವಿರುವುದಿಲ್ಲ.

ಜಮೀನಿನ ಮಾಲೀಕರು/ಅಭಿವೃದ್ಧಿದಾರರು ಸದರಿ ವಿನಾಯಿತಿ ಶುಲ್ಕವನ್ನು ಪಾವತಿಸಲು ನಿರಾಕರಿಸಿದಲ್ಲಿ ವಸತಿಗಾಗಿ ಗರಿಷ್ಠ ಶೇ. 55 ಹಾಗೂ ರಸ್ತೆ ನಂತರ ಉಳಿಯುವ ಜಾಗವನ್ನು ವಿನ್ಯಾಸ ನಕ್ಷೆಯಲ್ಲಿ ಒಂದೇ ಕಡೆ ಬರುವಂತೆ ಪ್ರತ್ಯೇಕವಾಗಿ ಗುರುತಿಸತಕ್ಕದ್ದು. ಹಾಗೂ ಪ್ರಾಧಿಕಾರವು ಸದರಿ ಜಾಗವನ್ನು ಮುಕ್ತಟ್ಟೆಯಾಗಿ ನೊಂದಾಯಿತ ಪರಿತ್ಯಜನಾ ಪತ್ರದ ರೂಪದಲ್ಲಿ ಸ್ವಾಧೀನಕ್ಕೆ ಪಡೆದು ನಂತರ ಹರಾಜು ಮೂಲಕ ವಿಲೇವಾರಿ ಮಾಡತಕ್ಕದ್ದು.

ಉದ್ಯಾನವನ/ಬಯಲುಜಾಗ ಮತ್ತು ನಾಗರೀಕ ಸೌಲಭ್ಯಗಳ ವಿನಾಯಿತಿ ಶುಲ್ಕ ಅಥವಾ ಪ್ರಾಧಿಕಾರದ ಸ್ವಾಧೀನಕ್ಕೆ ತೆಗೆದುಕೊಳ್ಳುವ ಜಾಗವನ್ನು ಹರಾಜು ಮೂಲಕ ವಿಲೇವಾರಿ ಮಾಡಿದಾಗ ಬರುವ ಮೊಬಲಗು ಸೇರಿದಂತೆ ಖಾಸಗಿ ಮಾಲೀಕರಿಂದ/ಅಭಿವೃದ್ಧಿದಾರರಿಂದ ಭರಿಸಿಕೊಳ್ಳುವ ಹಣವನ್ನು ಪ್ರಾಧಿಕಾರವು ಪ್ರತ್ಯೇಕ ಲೆಕ್ಕ ಶೀರ್ಷಿಕೆಯಡಿ ಖಾತೆ ತೆರೆದು ಇಡತಕ್ಕದ್ದು ಹಾಗೂ ಈ ಹಣವನ್ನು ಮಹಾಯೋಜನೆಯಲ್ಲಿ ಕಾಯ್ದಿರಿಸಿರುವ ಉದ್ಯಾನವನ/ಬಯಲುಜಾಗಗಳನ್ನು ಸರ್ಕಾರದ ಪೂರ್ವಾನುಮತಿಯೊಂದಿಗೆ ಭೂ ಸ್ವಾಧೀನಪಡಿಸಿಕೊಳ್ಳಲು ಮಾತ್ರ ಬಳಸಿಕೊಳ್ಳತಕ್ಕದ್ದು ಹಾಗೂ ಪ್ರಾಧಿಕಾರವು ಯಾವುದೇ ಕಾರಣಕ್ಕೂ ಈ ಹಣವನ್ನು ಬೇರೆ ಉದ್ದೇಶಕ್ಕೆ ಬಳಸಬಾರದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ- III | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೦೫, ೨೦೧೪ (ಮಾರ್ಗಶಿರ ೧೪, ಶಕ ವರ್ಷ ೧೯೩೬) | ನಂ. ೭೬೦ |
|---|---|---|
| Part- III | Bangalore, Friday, December 05, 2014 (Margashira 14, Shaka Varsha 1936) | No. 760 |


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಸಿಆಸುಇ 87 ಹೆಚ್‌ಹೆಚ್‌ಎಲ್ 2014, ಬೆಂಗಳೂರು, ದಿನಾಂಕ: 05.12.2014.**

ಸರ್ಕಾರದ ಅಧಿಸೂಚನೆ-I ರ ಸಂಖ್ಯೆ: ಸಿಆಸುಇ 25 ಹೆಚ್‌ಹೆಚ್‌ಎಲ್ 2013, ದಿನಾಂಕ 23.10.2013 ರಲ್ಲಿ ಸರ್ಕಾರವು 2014ನೇ ಸಾಲಿನ ಸಾರ್ವತ್ರಿಕ ರಜಾ ದಿನಗಳ ಪಟ್ಟಿಯಲ್ಲಿ ಹುತ್ತರಿ ಹಬ್ಬದ ಪ್ರಯುಕ್ತ ದಿನಾಂಕ:07.12.2014ರ ಭಾನುವಾರದಂದು ಕೊಡಗು ಜಿಲ್ಲೆಗೆ ಮಾತ್ರ ಮಂಜೂರು ಮಾಡಿರುವ ಸ್ಥಳೀಯ ಸಾರ್ವತ್ರಿಕ ರಜೆಯ ದಿನಾಂಕವನ್ನು ಬದಲಾಯಿಸಿ **ದಿನಾಂಕ:06.12.2014ರ ಶನಿವಾರದಂದು ಕೊಡಗು ಜಿಲ್ಲೆಗೆ ಮಾತ್ರ ಸ್ಥಳೀಯ ಸಾರ್ವತ್ರಿಕ ರಜೆಯನ್ನು** ಘೋಷಿಸಲಾಗಿದೆ.

ಸರ್ಕಾರದ ಅಧಿಸೂಚನೆ-I ರ ಅನುಬಂಧದ ಸಂಖ್ಯೆ: ಸಿಆಸುಇ 25 ಹೆಚ್‌ಹೆಚ್‌ಎಲ್ 2013, ದಿನಾಂಕ 23.10.2013 ರಲ್ಲಿ ಸರ್ಕಾರವು 2014ನೇ ಸಾಲಿನ ಪರಿಮಿತ ರಜಾ ದಿನಗಳ ಪಟ್ಟಿಯಲ್ಲಿ ಹುತ್ತರಿ ಹಬ್ಬದ ಪ್ರಯುಕ್ತ ದಿನಾಂಕ:07.12.2014ರ ಭಾನುವಾರದಂದು ಕೊಡಗು ಜಿಲ್ಲೆಯನ್ನು ಹೊರತುಪಡಿಸಿ ರಾಜ್ಯದ ಉಳಿದ ಭಾಗಗಳಿಗೆ ಮಂಜೂರು ಮಾಡಿರುವ ಪರಿಮಿತ ರಜೆಯ ದಿನಾಂಕವನ್ನು ಬದಲಾಯಿಸಿ **ದಿನಾಂಕ:06.12.2014ರ ಶನಿವಾರದಂದು** ಕೊಡಗು ಜಿಲ್ಲೆಯನ್ನು ಹೊರತುಪಡಿಸಿ ರಾಜ್ಯದ ಉಳಿದ ಭಾಗಗಳಿಗೆ ಪರಿಮಿತ ರಜೆಯನ್ನು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಡಾ|| ಬಿ.ಎಸ್. ಮಂಜುನಾಥ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಸಿಆಸುಇ 87 ಹೆಚ್‌ಹೆಚ್‌ಎಲ್ 2014, ಬೆಂಗಳೂರು, ದಿನಾಂಕ: 05.12.2014**

ಸರ್ಕಾರದ ಅಧಿಸೂಚನೆ-II ರ ಸಂಖ್ಯೆ: ಸಿಆಸುಇ 25 ಹೆಚ್‌ಹೆಚ್‌ಎಲ್ 2013, ದಿನಾಂಕ 23.10.2013 ರಲ್ಲಿ ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ: 20:25:26 ಪಿಯುಬಿ 1, ದಿನಾಂಕ: 15-06-1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯೇಬಲ್ ಇನ್ಸ್‌ಸ್ಟ್ರುಮೆಂಟ್ಸ್ ಆಕ್ಟ್ 1881ರ (1881ರ ಅಧಿನಿಯಮ ಸಂ.26) 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ 2014ನೇ ಸಾಲಿಗೆ ಹುತ್ತರಿ ಹಬ್ಬದ ಪ್ರಯುಕ್ತ

ದಿನಾಂಕ:07.12.2014ರ ಭಾನುವಾರದಂದು ಕೊಡಗು ಜಿಲ್ಲೆಗೆ ಮಾತ್ರ ಮಂಜೂರು ಮಾಡಿರುವ ಸ್ಥಳೀಯ ಸಾರ್ವತ್ರಿಕ ರಜೆಯ ದಿನಾಂಕವನ್ನು ಬದಲಾಯಿಸಿ **ದಿನಾಂಕ:06.12.2014ರ ಶನಿವಾರದಂದು ಕೊಡಗು ಜಿಲ್ಲೆಗೆ ಮಾತ್ರ ಸ್ಥಳೀಯ ಸಾರ್ವತ್ರಿಕ ರಜೆಯನ್ನು** ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಡಾ|| ಬಿ.ಎಸ್. ಮಂಜುನಾಥ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## PERSONNEL AND ADMINISTRATIVE REFORMS SECRETARIAT

### ADDENDUM

**No. DPAR.87.HHL.2014, Bangalore, dated: 05.12.2014**

In Government Notification-11, No: DPAR 25 HHL 2013, dated 23.10.2013, List of General Holidays sanctioned by the Government for the year 2014, As per the explanation of Section 25 of the Negotiable Instruments Act 1881 (Act No.XXVI of 1881) read with Notification No.20/25/26/Pub-1 dt.15.6.1957 of the Government of India, Ministry of Home Affairs on dated 07.12.2014, Sunday, the general holiday has been declared only for Kodagu District to celebrate the Huttari Festival. But the general holiday is changed to dated 06.12.2014, Saturday for Huttari Festival.

By order and in the name of the Governor of Karnataka,

**Dr. B.S.MANJUNATHA SWAMY**
Under Secretary to Government
D.P.A.R (STATE PROTOCOL)

## PERSONNEL AND ADMINISTRATIVE REFORMS SECRETARIAT

### ADDENDUM

**No. DPAR.87.HHL.2014, Bangalore, dated: 05.12.2014**

In Government Notification-1, No: DPAR 25 HHL 2013, dated 23.10.2013, List of General Holidays sanctioned by the Government for the year 2014, on dated 07.12.2014, Sunday, the general holiday has been declared only for Kodagu District to celebrate the Huttari Festival. But the general holiday is changed to dated 06.12.2014, Saturday for Huttari Festival .

In Annexure to Government Notification-1, No: DPAR 25 HHL 2013, dated 23.10.2013, List of Restricted Holidays sanctioned by the Government for the year 2014, on dated 07.12.2014, Sunday, the restricted holiday has been declared for the rest of State except Kodagu District to celebrate the Huttari Festival. But the restricted holiday is changed to dated 06.12.2014, Saturday for Huttari Festival .

By order and in the name of the Governor of Karnataka,

**Dr. B.S.MANJUNATHA SWAMY**
Under Secretary to Government
D.P.A.R (STATE PROTOCOL)


# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಮಂಗಳವಾರ, ಡಿಸೆಂಬರ್ ೦೯, ೨೦೧೪ (ಮಾರ್ಗಶಿರ ೧೮, ಶಕ ವರ್ಷ ೧೯೩೬) | ನಂ. ೭೬೮ |
| --- | --- | --- |
| Part– III | Bangalore, Tuesday, December 09, 2014 (Margashira 18, Shaka Varsha 1936) | No. 768 |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ನಅಇ 214 ಎಂಎಲ್ಆರ್ 2013, ಬೆಂಗಳೂರು, ದಿನಾಂಕ: 09.12.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಸಿರುಗುಪ್ಪ ಪುರಸಭೆ ಪ್ರದೇಶವನ್ನು **'ಸಿರುಗುಪ್ಪ ಸಣ್ಣ ನಗರ ಪ್ರದೇಶ'**ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು **'ಸಿರುಗುಪ್ಪ ನಗರಸಭೆ'**ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, 'ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ.214 ಎಂಎಲ್ಆರ್ 2013, ದಿನಾಂಕ 10.09.2014'ನ್ನು ದಿನಾಂಕ 10.09.2014 ಮತ್ತು ದಿನಾಂಕ 20.09.2014ರ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ–3ರ ಸಂಖ್ಯೆ: 561 ಮತ್ತು ಸಂಖ್ಯೆ: 587 ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ, 'ಅನುಸೂಚಿ ಎ' ಮತ್ತು 'ಅನುಸೂಚಿ ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಸಿರುಗುಪ್ಪ ಪುರಸಭೆ ಪ್ರದೇಶವನ್ನು **'ಸಿರುಗುಪ್ಪ ಸಣ್ಣ ನಗರ ಪ್ರದೇಶ'**ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು **'ಸಿರುಗುಪ್ಪ ನಗರಸಭೆ'**ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ ಎ**

ಸಿರುಗುಪ್ಪ ಪಟ್ಟಣ

**ಅನುಸೂಚಿ ಬಿ**

**ಪೂರ್ವ:–** ಸಿರುಗುಪ್ಪ ಗ್ರಾಮದ ಆಗ್ನೇಯ ದಿಕ್ಕಿನಿಂದ ಪಶ್ಚಿಮ 157 ರಿಂದ ಪ್ರಾರಂಭವಾಗಿ ಉತ್ತರ ದಿಕ್ಕಿಗೆ ಸರ್ವೆ ನಂ 155 ಜತೆ ಮುಂದುವರಿಯುತ್ತಾ ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ. 150ರ ಮುಖಾಂತರ ಹಾದು ಸಿರುಗುಪ್ಪ ಅರಳಿಗನೂರ್ ರಸ್ತೆ ಸ.ನಂ. 36ರ ಅಡ್ಡ ಹಾಯ್ದು ಅರಳಿಗನೂರ ಗ್ರಾಮದ ಗಡಿಗೆ ಹೊಂದಿಕೊಂಡಿರುವ ಸಿರುಗುಪ್ಪ ಗ್ರಾಮದ ಸರ್ವೆ ನಂ. 35, 34, 33, 29, 28 ಮುಂದುವರೆದು ಬಗ್ಗೂರು ಗಡಿ ಹೊಂದಿಕೊಂಡಂತೆ ಈಶಾನ್ಯ ದಿಕ್ಕಿನಲ್ಲಿ ಸಿರುಗುಪ್ಪ ಗ್ರಾಮ ಸ.ನಂ. 27, 26, 23, 22, 17, 16, 15, 14, 13ರಲ್ಲಿ ಮುಂದುವರೆದಿದೆ. ಸ.ನಂ. 12ರಲ್ಲಿ ಸಿರುಗುಪ್ಪ ಅದೋನಿ ರಸ್ತೆ ಅಡ್ಡ ಹಾಯ್ದು ಬಗ್ಗೂರು ಗಡಿ ಭಾಗಕ್ಕೆ ಸೇರಿದಂತೆ ಇರುವ ಸ.ನಂ.11, 10, 9 ಹೋಗಿರುತ್ತದೆ. ಗಡಿ ರೇಖೆಯಲ್ಲಿ ಮುಂದುವರೆಯುತ್ತಾ ಜಾಣಕನೂರ ಗಡಿಗೆ ಹೊಂದಿಕೊಂಡಂತೆ ಸಿರುಗುಪ್ಪ ಸ.ನಂ. 1ರಲ್ಲಿ ಮುಂದುವರೆದಿದೆ. ಮತ್ತು ಸ.ನಂ. 2, 88, 89, 90, 91ರಲ್ಲಿ ಮುಂದುವರೆದು ಸ.ನಂ. 242 ರಲ್ಲಿ ಈಶಾನ್ಯ ಮೂಲೆಯಲ್ಲಿ ಸಂದಿಸುತ್ತದೆ. ಈ ಎಲ್ಲಾ ಸರ್ವೆ ನಂ. ಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು ಇಬ್ರಾಹಿಂಪುರ ಗ್ರಾಮದ ಗಡಿಗಳಾಗಿರುತ್ತವೆ. ಇದು ಸಿರುಗುಪ್ಪದ ಪೂರ್ವ ಗಡಿಯಾಗಿರುತ್ತದೆ.

**ಉತ್ತರ:–** ಸಿರುಗುಪ್ಪ ಗ್ರಾಮದ ಈಶಾನ್ಯ ದಿಕ್ಕಿನಿಂದ ಪ್ರಾರಂಭವಾಗಿ ಪೂರ್ವಾಭಿಮುಖವಾಗಿ ಸ.ನಂ. 243, 245, 247, 248ರಲ್ಲಿ ಹಾಯ್ದು ಸ.ನಂ. 249ರಲ್ಲಿ ಬಾವಿಹಳ್ಳವನ್ನು ಅಡ್ಡ ಹಾಯ್ದು ಸಿರುಗುಪ್ಪ ಕುರುವಳ್ಳಿ ರಸ್ತೆಯನ್ನು ಸಂದಿಸಿ ಸರ್ವೆ ನಂ. 250ರಲ್ಲಿ ಸೇರುತ್ತದೆ. ರಸ್ತೆಯನ್ನು ಅಡ್ಡ ಹಾಯ್ದು ನಂತರ ಸ.ನಂ. 271, 272, 273, 274, 275, 276, 278, 279, 280, 283, 282ರಲ್ಲಿ ಪ್ರವೇಶಿಸಿ ಸರ್ವೆ ನಂ. 484, 485ರಲ್ಲಿ ಸಣ್ಣ ಹಳ್ಳದ ಜತೆ ಮುಂದುವರೆದು ಸಿರುಗುಪ್ಪ ಇಬ್ರಾಹಿಂಪುರ ರಸ್ತೆಯನ್ನು ಸ.ನಂ. 486ರಲ್ಲಿ ಅಡ್ಡ ಹಾಯ್ದು ಸಿರುಗುಪ್ಪ ಗ್ರಾಮದ ಉತ್ತರದ ಮೇರು ಪ್ರದೇಶದ ಸರ್ವೆ ನಂ. 497ರಲ್ಲಿ ಅಡ್ಡನ್ನು ಪ್ರವೇಶಿಸಿರುತ್ತದೆ. ಅಲ್ಲಿಂದ ಮತ್ತೆ ಕೆಳಮುಖವಾಗಿ ಸ.ನಂ. 498, 500, 501, 506, 507, 508, 511, 513, 518, 514, 515, 517, 519, 520, 522, 1022, 1023ರಲ್ಲಿ ಹಾಯ್ದು ಹೋಗಿರುತ್ತದೆ. ಈ ಎಲ್ಲಾ ಸರ್ವೆ ನಂಬರ್‌ಗಳೂ ಸಿರುಗುಪ್ಪ ಗ್ರಾಮದ್ದಾಗಿದ್ದು ಇಬ್ರಾಹಿಂಪುರ ಗ್ರಾಮದ ಗಡಿ ಪ್ರದೇಶವಾಗಿರುತ್ತದೆ. ಅಲ್ಲಿಂದ ಮತ್ತೆ ಉತ್ತರಾಭಿಮುಖವಾಗಿ ಸ.ನಂ. 1024, 1025, 1033, 1037, 1036, 1038, 1042, 1052, 1053, 1054, 1064, 1065, 1076, 1077, 1079, 1080, 1082, 1089, 1090, 1091, 1098, 1103, 1104, 1105, 1106, 1107, 1135, 1148, 1139 ಜತೆಯಾಗಿ ಸಿರುಗುಪ್ಪ ಗ್ರಾಮದ ವಾಯುವ್ಯ ದಿಕ್ಕಿಗೆ ಮುಂದುವರೆದಿರುತ್ತದೆ. ಈ ಎಲ್ಲಾ ಸರ್ವೆ ನಂಬರುಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು ದೇಶನೂರು ಗ್ರಾಮದ ಗಡಿಯಾಗಿರುತ್ತದೆ. ಇದು ಸಿರುಗುಪ್ಪ ನಗರಸಭೆಯ ಉತ್ತರ ಗಡಿಯಾಗಿರುತ್ತದೆ.

**ಪಶ್ಚಿಮ:–** ಸಿರುಗುಪ್ಪ ಗ್ರಾಮದ ನೈರುತ್ಯ ದಿಕ್ಕಿನ ಸರ್ವೆ ನಂ. 1137ರಿಂದ ಪ್ರಾರಂಭವಾಗಿ ತುಂಗಭದ್ರಾ ನದಿಯ ಸರಗು ಪ್ರದೇಶದ ಜೊತೆಯಾಗಿ ಪಶ್ಚಿಮಾಭಿಮುಖವಾಗಿ ಸ.ನಂ. 1187, 1188, 1189, 1529, 1530, 1531, 1537, 1539, 1547, 1548, 1555, 1556, 1563, 1564, 1567, 1570, 1571, 1647, 1648, 1649, 1650, 1652, 1653, 1657, 1658, 1659, 1663, 1662, 1664, 1679, 1680, 1682, 1683, 1800, 1780, 1731, 1781, 1782, 1784, 1785, 1786, 1788, 1789, 1790 ರಿಂದ 1794, 1796ರಲ್ಲಿ ಮುಂದುವರೆದು ಮತ್ತೆ ಕೆಳಮುಖವಾಗಿ ಮುಂದುವರೆದು ಜಲ ವಿಜಯನಗರ ಅಣೆಕಟ್ಟು ಪ್ರದೇಶದಲ್ಲಿ ನದಿಯ ಅಡ್ಡ ಹಾಯ್ದು ಸ.ನಂ. 1798ನ್ನು ಪ್ರವೇಶಿಸಿರುತ್ತದೆ. ಈ ಎಲ್ಲಾ ಸರ್ವೆ ನಂಬರುಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು ತುಂಗಭದ್ರ ನದಿಯ ಸರಗು ಪ್ರದೇಶಕ್ಕೆ ಸೇರಿದ್ದು ಸರ್ವೆ ನಂ. 1797ಕ್ಕೆ ಸೇರಿದಂತೆ ಭಾಗಶಃ ಕೆಂಚನಗುಡ್ಡ ಗ್ರಾಮದ ಗಡಿಯಾಗಿರುತ್ತದೆ. ಇದು ಸಿರುಗುಪ್ಪದ ಪಶ್ಚಿಮ ಗಡಿಯಾಗಿರುತ್ತದೆ.

**ದಕ್ಷಿಣ:–** ನೈರುತ್ಯ ದಿಕ್ಕಿನಿಂದ ಪ್ರಾರಂಭವಾಗಿರುತ್ತದೆ. ಸಿರುಗುಪ್ಪ ಗ್ರಾಮಕ್ಕೆ ಸೇರಿದ ಸರ್ವೆ ನಂ. 1798ರ ಕೆಳಗಿನ ಪ್ರದೇಶವಾದ ಸರ್ವೆ ನಂ. 1799 ಆಗಿದ್ದು ತುಂಗಭದ್ರ ನದಿಯ ಭಾಗವಾಗಿರುತ್ತದೆ. ಉತ್ತರಾಭಿಮುಖವಾಗಿ ತುಂಗಭದ್ರ ನದಿಗೆ ಹೊಂದಿಕೊಂಡಂತಿರುವ ಗಡಿ ರೇಖೆಯಲ್ಲಿ ಮುಂದುವರೆದು ಸರ್ವೆ ನಂ. 1795, 1774, 1775, 1773, 1772, 1761, 1760, 1759, 1757, 1707, 1708, 1709, 1706, 1705, 1704, 1703, 1702, 1696, 1695, 1634, 1635, 1619, 1621, 1633, 1623, 1632, 1625, 1626, 1631, 1630, 1400, 1399, 1398, 1397, 1395, 1396, 1394, 1393, 1392, 1388, 1384, 1377, 1375, 1374, 1373, 1359, 1358, 1355, 1357, 1356, 1351, 1352, 1353, 1354, 1317, 1315, ಪ್ರವೇಶಿಸಿ ಪ್ರಧಾನ ಕಾಲುವೆ ಜತೆಯಾಗಿ ಮುಂದುವರೆದಿರುತ್ತದೆ. ಈ ಪ್ರಧಾನ ಕಾಲುವೆಯನ್ನು ಅಡ್ಡ

ಹಾಯ್ದು ನಂತರ ಸರ್ವೆ ನಂ. 793ರಲ್ಲಿ ಪ್ರವೇಶಿಸಿ ಸಿರುಗುಪ್ಪ ಕೆಂಚನಗುಡ್ಡ ರಸ್ತೆಯನ್ನು ಸ.ನಂ. 792ರಲ್ಲಿ ಅಡ್ಡ ಹಾಯ್ದು ಮುಂದೆ ಕೆಳಮುಖವಾಗಿ ಸ.ನಂ. 791 ಮತ್ತು 790ರ ಜೊತೆ ಮುಂದುವರೆಯುತ್ತದೆ. ಈ ಎಲ್ಲಾ ಸ.ನಂ.ಗಳು ಸಿರುಗುಪ್ಪ ಗ್ರಾಮಕ್ಕೆ ಸೇರಿದ್ದು, ಕೆಂಚನಗುಡ್ಡ ಗ್ರಾಮದ ಗಡಿಯಾಗಿರುತ್ತದೆ. ಇಲ್ಲಿಂದ ಮತ್ತೆ ಸರ್ವೆ ನಂ. 789 ಮತ್ತು 788ನ್ನು ಪ್ರವೇಶಿಸಿ ಸರ್ವೆ ನಂ. 781ರಲ್ಲಿ ಇರುವ ಸಿರುಗುಪ್ಪ ದೇವಲಾಪುರ ಗ್ರಾಮದ ರಸ್ತೆಯನ್ನು ಅಡ್ಡ ಹಾಯುತ್ತದೆ. ಗಡಿ ರೇಖೆಯ ಜತೆ ಮುಂದುವರೆದು ಸರ್ವೆ ನಂ. 403, 402, 401, 400ರಲ್ಲಿ ಹಾಯುತ್ತದೆ. ಮುಂದೆ ನೈರುತ್ಯ ದಿಕ್ಕಿನಲ್ಲಿ ಸಿರುಗುಪ್ಪ ಗ್ರಾಮದ ಸೀಮಾರೇಖೆಯನ್ನು ದಾಟಿ ದೇವಲಾಪುರ ಗ್ರಾಮದ ಸರ್ವೆ ನಂ. 29, 28, 39, 40ರಲ್ಲಿ ಪ್ರವೇಶಿಸಿರುತ್ತದೆ. ಮತ್ತೆ ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ. 36ನ್ನು ಸ್ಪರ್ಶಿಸಿ ಸ.ನಂ. 36ರಲ್ಲಿ ಇಡೀ ಕಾಲುವೆಯನ್ನು ಅಡ್ಡ ಹಾಯುತ್ತದೆ. ಮುಂದೆ ಕೆಳಮುಖವಾಗಿ ಮತ್ತೆ ಮುಂದುವರೆದು ದೇವಲಾಪುರ ಗ್ರಾಮದ ಸರ್ವೆ ನಂ. 104ನ್ನು ಪ್ರವೇಶಿಸಿ ಮತ್ತೆ ಪೂರ್ವಾಭಿಮುಖವಾಗಿ ಸರ್ವೆ ನಂ. 106ರ ಜತೆ ತಿರುವು ಪಡೆದಂತಿರುತ್ತದೆ. ಮತ್ತೆ ಪೂರ್ವಾಭಿಮುಖವಾಗಿ ಮುಂದುವರೆದು ಇದೇ ಸ.ನಂಬರ್‌ನ್ನಲಿ ಬರುವ ಬಳ್ಳಾರಿ ಸಿರುಗುಪ್ಪ ಪ್ರಧಾನ ರಸ್ತೆ ಅಡ್ಡ ಹಾಯ್ದು ಸರ್ವೆ ನಂ. 6ನ್ನು ಸೇರುತ್ತದೆ. ಇಲ್ಲಿಂದ ಉತ್ತರಾಭಿಮುಖವಾಗಿ ಸ.ನಂ. 6 ಮತ್ತು 5ರ ಜೊತೆ ಹೊರಟು ಸ.ನಂ. 5 ಮತ್ತು 10ಕ್ಕೆ ಗಡಿಯಂತಿರುವ ಹಾಲಿ ರಸ್ತೆಯನ್ನು ಅಡ್ಡ ಹಾಯುತ್ತದೆ. ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ.11ರಲ್ಲಿ ದಕ್ಷಿಣದ ಕೊನೆಯಲ್ಲಿ ಕೊನೆಗೊಳ್ಳುತ್ತದೆ. ಅಲ್ಲಿಂದ ಸ.ನಂ.1ರಲ್ಲಿ ಉತ್ತರಾಭಿಮುಖವಾಗಿ ಮುಂದುವರೆದು ಸ.ನಂ. 386ರಲ್ಲಿರುವ ಸಿರುಗುಪ್ಪ ಗ್ರಾಮದ ಗಡಿರೇಖೆಯಲ್ಲಿ ತಲುಪುತ್ತದೆ. ಈ ಎಲ್ಲಾ ಸರ್ವೆ ನಂಬರುಗಳು ದೇವಲಾಪುರಕ್ಕೆ ಸೇರಿದ್ದು ದೇವಲಾಪುರದ ಗಡಿಯಾಗಿರುತ್ತದೆ. ಇದು ಸಿರುಗುಪ್ಪದ ವ್ಯಾಪ್ತಿಯ ಗಡಿ ಪ್ರದೇಶವಾಗಿರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## URBAN DEVELOPMENT SECRETARIAT
## NOTIFICATION
**No.UDD 214 MLR 2013, Bangalore, Dated:09.12.2014**

_Whereas the notification of declaring 'Town Municipal Area' of Siraguppa mentioned in Schedule "A" along with boundaries mentioned in Scheduled "B" as the "Smaller Urban Area" of Siraguppa and further specifying such area to be the "City Municipal Area" of Siraguppa was published as required by Section 9 of the Karnataka Municipalities Act 1964, vide 'Government notification no. UDD 214 MLR 2013, dated:10-09-2014' in part- III, No.561 and No.587 of Karnataka Gazette Extraordinary, dated:10.09.2014 and dated:20.09.2014 inviting objections from all persons likely to be affected thereby on or before thirty days from the date of publication of the above notification.

And whereas the notification was made available to the public on the day of publication;

And whereas no objections were received within the stipulated time;

Now, therefore, in exercise of the powers conferred by Section 3 read with Section 361 of the Karnataka Municipalities Act 1964, the Governor, hereby notify 'Town Municipal Area' of Siraguppa mentioned in Schedule "A" along with boundaries mentioned in Scheduled "B" as the **"Smaller Urban Area" of Siraguppa** and further specify such area to be the **"City Municipal Area" of Siraguppa** having regard to-

i. The population of such area is not less than twenty thousand and not more than three lakhs;
ii. The density of population in such area is not less than one thousand five hundred inhabitants to one square kilometer of area;
iii. The revenue generated for local administration from such area from tax and non-tax sources in the year of the last preceding census is not less than rupees nine lakhs per annum or a sum calculated at the rate of rupees forty five per capita per annum, whichever is higher;
iv. The percentage of employment in non-agricultural activities is not less than fifty per cent of the total employment.

By Order and in the name of the
Governor of Karnataka
**SIDDIQ PASHA**
Under Secretary to Government
Urban Development Department

**SCHEDULE-A**

Siruguppa Town

**SCHEDULE – B**

**East:** Commencing from South –East corner of Siruguppa villages comprised in Sy. No.157 and Moving in the Northern direction along survey No. 155, it turns towards the Eastern side and pass through S.No. 150 and after crossing the Siruguppa – Araliganur Road comprised in Sy. No. 36, it goes further in Sy. No. 35, 34, 33, 29, 28 of Siruguppa Village bordering the village of Araliganur it goes in the Norther-East direction through Sy. Nos. 27, 26, 23, 22, 17, 16, 15, 14, 13, of Siruguppa Village bordering the village of Baggur. It crosses the Siruguppa Adoni Road, comprised in Sy. No. 12 and goes into Sy. Nos. 11, 10, 9 of Siruguppa village, bordering the village of baggur. Having along the boundary line, it pass through Sy. No. 1 of Siruguppa Village, bordering the Village of Chanakanuru Village. Moving further along Sy.Nos. 2, 88, 89, 90, 91 it meets in the Norther-East corner comprised

in Sy.Nos. 242. All these Sy. Nos. are of Siruguppa Village bordering the Village of Ibrahampura. This constitutes the Eastern boundary of Siruguppa City Municipal Council.

**North:** Commencing from the North-East corner of Siruguppa Village, and goes in the Northern direction, it pass through Sy.Nos. 243, 245, 246, 247, 248 and cross the Bavi Halla comprised in Sy. No. 249 and meet on the round landing Siruguppa to Kuruvalli comprised in Sy. No. 250. After crossing this road, it enters into Sy.Nos. 271,272,273,274,275,276,278,279,280,281,283, 282 and goes along the small halla in Sy. Nos. 484,485, it crosses the Siruguppa-Ibraharampura road comprised in Sy.No.486, and enters into Sy.No.497, which is the Northern most point of the Siruguppa Village. Then moving downwards through Sy.Nos. 498, 500, 501, 506, 507, 508, 511,513, 518, 514, 515, 517, 519, 520, 522 1022,1023,All these Sy.Nos. are of Siruguppa village bordering the village of Ibraharampura. Moving further in the Northern direction along Sy. Nos. 1024, 1025, 1033, 1037, 1036, 1038, 1042, 1052, 1053, 1054, 1064, 1065,1076,1077,1079, 1080,1082, 1089, 1090, 1091, 1098, 1103, 1104, 1105, 1106, 1107,1135,1148,1139,which is the North-West corner of Siruguppa village. All these Sy,.Nos. are of Siruguppa village bordering the villge Deshanur. This Constitutes the Northern boundary of the Siruguppa City Municipal Council.

**West:** Commencing from Sy.No. 1137, in North-West corner of Siruguppa village, it goes along the fringe of the River Tungabhadra in the Western Direction along Sy. Nos. 1187, 1188,1189,1529,1530,1531, 1537,1539,1547,1548, 1555,1556,1563,1564, 1567,1570, 1571, 1647, 1648,1649,1650,1652,1653,1657,1658,1659,1663,1662,1664,1679,1680, 1682, 1683,1800, 1780, 1731, 1781, 1782, 1784,1785,1786,1787,1788, 1789, 1790, to 1794, 1796 and moving further down wards it enters into Sy.Nos. 1798, by crossing the river Tungabhadra on the old Vijayanagara Ayacut. All these numbers are of Siruguppa village situated on the Fringe of the river Tungabhadra comprised in Sy.No.1797 of Siruguppa village and partly bordering the village of Kenchanagudda. This constitutes the Western boundary of the Siruguppa City Municipal Council.

**South:** Commencing from the South-West corner, which forms the portion of the River Tungabhadra belonging to Siruguppa village comprised in Sy.No.1799 which is below the Island Sy.No. 1798, it proceeds in the Northern direction along the boundary line which is adjacent to the River Tungabhadra and enter into Sy. Nos. 1795, 1774, 1775, 1773, 1772, 1761, 1760, 1759, 1757, 1707, 1708, 1709, 1706, 1705, 1704, 1703, 1702, 1696, 1695, 1634, 1635, 1619, 1621, 1633, 1623, 1632, 1625, 1626,1631,1630,1400,1399, 1398, 1397, 1395, 1396, 1394, 1393, 1392, 1388, 1384, 1377, 1375, 1374, 1373, 1359, 1358, 1355, 1357, 1356, 1351, 1352, 1353,1354,1317,1315, and all these numbers pass through along pradana kalva. After crossing this kalava, it enters into Sy.No.793 and cross the Siruguppa-Kenchanagudda. Road comprised in Sy.No. 792 and moving further downwards along Sy.No791 and 790. All these Sy.Nos. are of Siruguppa village bordering the village of Kenchanagudda. It now enter S.No.789 and 788 and cross Siruguppa Devalalpura road comprised in Sy.No.781. Moving further along the boundary, it pass through in Sy.No. 403, 402, 401, 400. Moving South-West crossing Siruguppa village boundary and enters Devalalpur village Sy. Nos.29,28,39,40, further moving eastwards touching Sy.Nos. 36 and crossing the I.D. Canal in Sy.No.36. Moving downwards it enters in Sy.No.104 of Devalalpur village and again turning. Eastwards along Sy.No.106. Further moving Eastwards along Sy.Nos. and reaches Sy.Nos. 6. Now moving towards North along the Sy.Nos. 6 and 5cross the existing Road bordering Sy.Nos. of 5 and 10. Moving Eastwards in Sy.No.10 and ends at Southern border of Sy.No.11. Moving Northwards along Sy.No.1 reaches the present Siruguppa village boundary in Sy.No.386. All these Sy.Nos are of Devalalpur village bordering the village of Devalalpur. This constitutes the Southern boundary of Siruguppa City Municipal Council.

**SIDDIQ PASHA**
Under Secretary to Government
Urban Development Department

# ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಮಂಗಳವಾರ, ಡಿಸೆಂಬರ್ ೦೯, ೨೦೧೪ (ಮಾರ್ಗಶಿರ ೧೮, ಶಕ ವರ್ಷ ೧೯೩೬) | ನಂ. ೭೬೯ |
|---|---|---|
| **Part– III** | **Bangalore, Tuesday, December 09, 2014 (Margashira 18, Shaka Varsha 1936)** | **No. 769** |



## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 215 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ: 09.12.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಶಿಡ್ಲಘಟ್ಟ ಪುರಸಭೆ ಪ್ರದೇಶವನ್ನು 'ಶಿಡ್ಲಘಟ್ಟ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಶಿಡ್ಲಘಟ್ಟ ನಗರಸಭೆ'ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 215 ಎಂಎಲ್‌ಆರ್ 2013, ದಿನಾಂಕ 11.09.2014'ನ್ನು ದಿನಾಂಕ 11.09.2014 ಮತ್ತು ದಿನಾಂಕ 20.09.2014ರ ಕರ್ನಾಟಕ ವಿಶೇಷ ರಾಜ್ಯ

ಪತ್ರದ ಭಾಗ-3ರ ಸಂಖ್ಯೆ: 573 ಮತ್ತು ಸಂಖ್ಯೆ: 583ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 361ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ, 'ಅನುಸೂಚಿ ಎ' ಮತ್ತು 'ಅನುಸೂಚಿ ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಶಿಡ್ಲಘಟ್ಟ ಪುರಸಭೆ ಪ್ರದೇಶವನ್ನು **'ಶಿಡ್ಲಘಟ್ಟ ಸಣ್ಣ ನಗರ ಪ್ರದೇಶ'**ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು **'ಶಿಡ್ಲಘಟ್ಟ ನಗರಸಭೆ'**ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

1) ಶಿಡ್ಲಘಟ್ಟ ಪಟ್ಟಣ

2) ಹಳ್ಳಿಗಳು: ಗಾಂಧಿನಗರ,

1ನೇ ಕಾರ್ಮಿಕ ನಗರ,

2ನೇ ಕಾರ್ಮಿಕನಗರ,

3ನೇ ಕಾರ್ಮಿಕನಗರ,

ಅಜಾದ್‌ನಗರ,

ಖಾಸಿಂ ಪಾಳ್ಯ,

ಮಹಬೂಬ್‌ನಗರ

**ಅನುಸೂಚಿ–ಬಿ**

**ಪೂರ್ವಕ್ಕೆ :** 1) ಶಿಡ್ಲಘಟ್ಟ ಹೊಸಕೋಟೆ ಹೊರವಲಯದ ರಸ್ತೆಯಿಂದ ಪ್ರಾರಂಭಗೊಂಡು ಪೂರ್ವಾಭಿಮುಖವಾಗಿ ಗೌಡನಕೆರೆ ಅಂಗಳದಿಂದ ಹಾಗೂ ಶಿಡ್ಲಘಟ್ಟ ಚಿಂತಾಮಣಿ ರಸ್ತೆಯನ್ನು ದಾಟಿಕೊಂಡು ಬೂದಾಳ ಗ್ರಾಮದ ಸರ್ವೆ ನಂಬರುಗಳ ಜಮೀನಿಗೆ ಹೊಂದಿಕೊಂಡಂತೆ ಶಿಡ್ಲಘಟ್ಟ ಚಿಂತಾಮಣಿ ರೈಲು ಮಾರ್ಗದಲ್ಲಿ ದಾಟಿಕೊಂಡು ಶಿಡ್ಲಘಟ್ಟ ಸರ್ವೆ.ನಂಬರ್ 85ಕ್ಕೆ ಅಂತ್ಯಗೊಳ್ಳುತ್ತದೆ.

**ಪಶ್ಚಿಮಕ್ಕೆ :** 2) ನಲ್ಲಿಮರದಹಳ್ಳಿ ಗ್ರಾಮದ ಸರ್ವೆ ನಂಬರ್ 126ರಿಂದ ಪ್ರಾರಂಭಗೊಂಡು ದಕ್ಷಿಣಾಭಿಮುಖವಾಗಿ ಶಿಡ್ಲಘಟ್ಟ–ಚಿಕ್ಕಬಳ್ಳಾಪುರ ರೈಲು ಮಾರ್ಗವನ್ನು ದಾಟಿಕೊಂಡು ಪಿ.ಡಬ್ಲ್ಯುಡಿ ಬೈಪಾಸ್ ರಸ್ತೆ ಮುಖಾಂತರ ಶಿಡ್ಲಘಟ್ಟ–ಚಿಕ್ಕಬಳ್ಳಾಪುರ ಕ್ರಾಸ್‌ನಿಂದ ಚಿಂತಾಮಣಿ ರಸ್ತೆ ಮಾರ್ಗದಲ್ಲಿ ಮುಂದುವರೆದು ಶಿಡ್ಲಘಟ್ಟ ಗ್ರಾಮದ ಸರ್ವೆ ನಂಬರ್ 388ರ ಜಮೀನು ಪ್ರದೇಶದಲ್ಲಿ ಮುಕ್ತಾಯಗೊಳ್ಳುವ ಪ್ರದೇಶ

**ಉತ್ತರಕ್ಕೆ :** 3) ಶಿಡ್ಲಘಟ್ಟ 17ರ ಪ್ರದೇಶದಿಂದ ಮುಂದುವರೆದು ಪೂರ್ವಾಭಿಮುಖವಾಗಿ ಮುಂದುವರೆದಂತೆ ಇದೇ ಗ್ರಾಮದ ಸರ್ವೆ ನಂ. 18, 21, 25, 27, 28, 30, 31, 32, 33, 34, 35, 36, 37 ಪ್ರದೇಶಗಳನ್ನು ಹೊಂದಿಕೊಂಡಂತೆ ತಾತಹಳ್ಳಿ ರಸ್ತೆಯ ಮುಖಾಂತರ ಶಿಡ್ಲಘಟ್ಟ ಕಸಬಾದ ಸರ್ವೆ ನಂ. 85ಕ್ಕೆ ಕೊನೆಗೊಳ್ಳುತ್ತದೆ.

**ದಕ್ಷಿಣಕ್ಕೆ :** 4) ಶಿಡ್ಲಘಟ್ಟ–ಚಿಂತಾಮಣಿ ರಸ್ತೆಯಿಂದ ಪೂರ್ವಾಭಿಮುಖವಾಗಿ ಮುಂದುವರೆದು ಶಿಡ್ಲಘಟ್ಟ ಗ್ರಾಮದ ಸರ್ವೆ ನಂ. 386 ಜಮೀನುಗಳನ್ನು ಒಳಗೊಂಡಂತೆ ಮುಂದುವರೆದು ಇದೇ ಗ್ರಾಮದ ಸರ್ವೆ ನಂ. 299ರ ಮುಖಾಂತರ ಹಾಗೂ ಇದೇ ಗ್ರಾಮದ ಸರ್ವೆ ನಂ.277ಕ್ಕೆ ಕೊನೆಗೊಂಡು ಶಿಡ್ಲಘಟ್ಟ–ಹೊಸಕೋಟೆ ರಸ್ತೆಯ ಹೊರವಲಯದ ರಸ್ತೆಗೆ ಕೊನೆಗೊಳ್ಳುವ ಪ್ರದೇಶವನ್ನು ಒಳಗೊಂಡಿರುತ್ತದೆ.

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## URBAN DEVELOPMENT SECRETARIAT

### NOTIFICATION

### No.UDD 215 MLR 2013, Bangalore, Dated:09.12.2014

Whereas the notification of declaring 'Town Municipal Area' of Siddlaghatta mentioned in Schedule "A" along with boundaries mentioned in Scheduled "B" as the "Smaller Urban Area" of Siddlaghatta and further specifying such area to be the "City Municipal Area" of Siddlaghatta was published as required by Section 9 of the Karnataka Municipalities Act 1964, vide 'Government notification no. UDD 215 MLR 2013, dated:11-09-2014' in part- III, No.573 and No.583 of Karnataka Gazette Extraordinary, dated:11.09.2014 and dated:20.09.2014 inviting objections from all persons likely to be affected thereby on or before thirty days from the date of publication of the above notification .

And whereas the notification was made available to the public on the day of publication;

And whereas no objections were received within the stipulated time;

Now, therefore, in exercise of the powers conferred by Section 3 read with Section 361 of the Karnataka Municipalities Act 1964, the Governor, hereby notify 'Town Municipal Area' of Siddlaghatta mentioned in Schedule "A" along with boundaries mentioned in Scheduled "B" as the **"Smaller Urban Area" of Siddlaghatta** and further specify such area to be the **"City Municipal Area" of Siddlaghatta** having regard to-

i. The population of such area is not less than twenty thousand and not more than three lakhs;

ii. The density of population in such area is not less than one thousand five hundred inhabitants to one square kilometer of area;

iii. The revenue generated for local administration from such area from tax and non-tax sources in the year of the last preceding census is not less than rupees nine lakhs per annum or a sum calculated at the rate of rupees forty five per capita per annum, whichever is higher;

iv. The percentage of employment in non-agricultural activities is not less than fifty per cent of the total employment.

By Order and in the name of the Governor of Karnataka
**SIDDIQ PASHA**
Under Secretary to Government

## SCHEDULE-A

1. Siddlaghatta Town

Villages:-
- i. Gandhinagar
- i. Karmikanagara- 1
- ii. Karmikanagar-2
- iii. Karmikanagar-3
- iv. Azadnagara,
- v. Khasimpalya,
- vi. Mahaboobnagara.

## SCHEDULE – B

**EAST:---** Starting from Southern side of Siddlaghatta-Hosakote Road and turning towards Eastern side of Gowdanakere tank bed and crosses Chintamani-Siddlaghatta Road and Outer Road and outer side of Boodala village survey numbers and turning Northern side crossing with Siddlaghatta-Chintamani railway line and ends with Sy.No. 85 of Siddlaghatta.

**WEST:---** Starting from outer boundary of Sy.No. 126 of Nallimaradahalli village and turning to Southern side and crossing Siddlaghatta-Chikballapur railway line and passes along P.W.D. bye-pass Road area and turning to Chikkballapur-Chintamani cross Road and ends with Southern side outer boundary of Sy.No. 388 of Siddlaghatta Kasaba.

**NORTH:---**Starting from Sy.No.17 of Siddlaghatta village and turning Eastern side along Sy.Nos.18,21,25,27,28,30,31,32,33,34,35,36,37 and run along Thathahalli Road and ends with Sy.No. 85 of Siddlaghatta.

**SOUTH:---**Starting from Siddlaghatta-Chintamani cross Road and runs towards Eastern side starting from Sy.No. 386 and running with Sy.No. 299 and ends with Eastern side outer boundary Sy.No. 277 and then turning to Northern side and ends with Siddlaghatta-Hosakote Road.

**SIDDIQ PASHA**
Under Secretary to Government
Urban Development Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಮಂಗಳವಾರ, ಡಿಸೆಂಬರ್ ೦೯, ೨೦೧೪ (ಮಾರ್ಗಶಿರ ೧೮, ಶಕ ವರ್ಷ ೧೯೩೬) | ನಂ. ೭೭೦ |
|---|---|---|
| Part– III | Bangalore, Tuesday, December 09, 2014 (Margashira 18, Shaka Varsha 1936) | No. 770 |

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 11 ಎಂಎಲ್ಆರ್ 2014, ಬೆಂಗಳೂರು, ದಿನಾಂಕ: 09.12.2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಸುರಪುರ ಪುರಸಭೆ ಪ್ರದೇಶವನ್ನು 'ಸುರಪುರ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಸುರಪುರ ನಗರಸಭೆ'ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ನ.ಅ.ಇ.11 ಎಂಎಲ್ಆರ್ 2014, ದಿನಾಂಕ 10.09.2014'ನ್ನು ದಿನಾಂಕ 10.09.2014 ಮತ್ತು ದಿನಾಂಕ 20.09.2014 ರ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ–3ರ ಸಂಖ್ಯೆ: 569 ಮತ್ತು ಸಂಖ್ಯೆ: 595ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 361 ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮುಂದಿನವುಗಳನ್ನು ಗಮನಿಸಿ, 'ಅನುಸೂಚಿ ಎ' ಮತ್ತು 'ಅನುಸೂಚಿ ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಸುರಪುರ ಪುರಸಭೆ ಪ್ರದೇಶವನ್ನು '**ಸುರಪುರ ಸಣ್ಣ ನಗರ ಪ್ರದೇಶ**'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು '**ಸುರಪುರ ನಗರಸಭೆ**'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಸಿದ್ದಿಕ್ ಪಾಷ

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಸೂಚಿ ಎ**

(1) ಸುರಪುರ ಪಟ್ಟಣದ ಮಿತಿ ಸೇರಿದಂತೆ ಸುರಪುರ ಗ್ರಾಮದ ಪೂರ್ತಿ ಕಂದಾಯ ಗ್ರಾಮ.

(2) ಹಸನಪುರ ಗ್ರಾಮದ ಗ್ರಾಮಠಾಣ ಸೇರಿ ಭಾಗ ಕಂದಾಯ ಗ್ರಾಮ.

(3) ತಲವಾರಗೇರಾ ಗ್ರಾಮದ ಭಾಗ ಕಂದಾಯ ಗ್ರಾಮ.

(4) ವನಕಿಹಾಳ ಗ್ರಾಮದ ಭಾಗ ಕಂದಾಯ ಗ್ರಾಮ ಠಾಣಾ ಸಹಿತ.

(5) ಖಾನಾಪುರ ಗ್ರಾಮದ ಭಾಗ ಕಂದಾಯ ಗ್ರಾಮ.

(6) ಕವಡಿಮಟ್ಟಿ ಗ್ರಾಮದ ಕಂದಾಯ ಗ್ರಾಮ ಠಾಣಾ ಸಹಿತ.

(7) ನರಸಿಂಗಪೇಟೆ ಗ್ರಾಮದ ಗ್ರಾಮಠಾಣ ಸೇರಿ ಪೂರ್ತಿ ಕಂದಾಯ ಗ್ರಾಮ.

(8) ದೇವಿಕೇರೆ ಕಂದಾಯ ಗ್ರಾಮದ ಸರ್ವೆ ನಂ:63, 64 ಮತ್ತು 65 ಮಾತ್ರ ಸೇರಿರುತ್ತದೆ.

**ಅನುಸೂಚಿ ಬಿ**

**ಉತ್ತರ:–** ಸುರಪುರ, ತಲವಾರಗೇರಾ ಮತ್ತು ದೇವರಗೋನಾಳ ಗ್ರಾಮಗಳ ಸೀಮೆಗಳು ವಿಲೀನಗೊಳ್ಳುವ ಬಿಂದು ಅಂದರೆ ದೇವರಗೋನಾಳ ಗ್ರಾಮದ ಆಗ್ನೇಯ ಮೂಲೆಯಿಂದ ರೇಖೆಯು ಆರಂಭವಾಗಿ ಪೂರ್ವಾಭಿಮುಖವಾಗಿ ಸುರಪುರ ಮತ್ತು ದೇವರಗೋನಾಳ ಗ್ರಾಮಗಳ ಸೀಮಗಳಗುಂಟ ಚಲಿಸಿ ಸುರಪುರ, ದೇವರಗೋನಾಳ ಮತ್ತು ಹಸನಪುರ ಗ್ರಾಮಗಳ ಸೀಮೆಗಳು ವಿಲೀನಗೊಳ್ಳುವ ಬಿಂದುವರೆಗೆ ತನ್ನ ಚಲನೆಯನ್ನು ಮುಂದುವರಿಸುತ್ತಾ, ದಕ್ಷಿಣ ಕಡೆ ತಿರುಗಿ ಹಸನಪುರ ಗ್ರಾಮದ ಸರ್ವೆ ನಂ:174ರ ನೈರುತ್ಯ ಮೂಲೆಯವರೆಗೆ ಸೇರಿ ಪುನ: ಉತ್ತರ ಕಡೆ ತಿರುಗಿ ಸುರಪುರ ಗ್ರಾಮದ ಸ.ನಂ:173, 172, 171, 170 ಮತ್ತು 169ರ ಪಶ್ಚಿಮ ಗಡಿಗುಂಟ ಚಲನೆಯನ್ನು ಮುಂದುವರಿಸುತ್ತದೆ ಮತ್ತು ಅಲ್ಲಿಂದ ಪೂರ್ವಕ್ಕೆ ತಿರುಗಿ ಅದೇ ಗ್ರಾಮದ ಸ.ನಂ.169, 161, 163, 159, 92, 83, 61 ಮತ್ತು 60ರ ಉತ್ತರ ದಿಕ್ಕಿನ ಗಡಿಗುಂಟ ಚಲನೆಯನ್ನು ಮುಂದುವರಿಸುವ ಸಮಯದಲ್ಲಿ ನಾಲೆ ದಾಟಿ ಈ ನಾಲೆಯ ಉತ್ತರ

